# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 399
ಸದಸ್ಯರ ಹೆಸರು : ಶ್ರೀ ಮಾನೆ ಶ್ರೀನಿವಾಸ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 11.12.2020
ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಖಾದಿ ಸಂಘ ಸಂಸ್ಥೆಗಳಿಗೆ ವಾರ್ಷಿಕವಾಗಿ ಅನುದಾನವನ್ನು ಬಿಡುಗಡೆಗೊಳಿಸುವ ಯೋಜನೆ ಸರ್ಕಾರದ ಮುಂದಿದೆಯೇ; | ರಾಜ್ಯದಲ್ಲಿರುವ ಖಾದಿ ಸಂಘ ಸಂಸ್ಥೆಗಳಿಗೆ ವಾರ್ಷಿಕವಾಗಿ ಮಾರುಕಟ್ಟೆ ಅಭಿವೃದ್ಧಿ ಸಹಾಯಧನ (ಎಂ.ಡಿ.ಎ) ಹಾಗೂ ಪ್ರೋತ್ಸಾಹ ಮಜೂರಿಗಾಗಿ ಅನುದಾನವನ್ನು ನೀಡುವ ಯೋಜನೆ ಜಾರಿಯಲ್ಲಿದ್ದು, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. |
| ಆ) | ಈ ಸಂಘ ಸಂಸ್ಥೆಗಳಿಗೆ ವಾರ್ಷಿಕವಾಗಿ ಎಷ್ಟು ಅನುದಾನವನ್ನು ಬಿಡುಗಡೆಗೊಳಿಸಲಾಗುತ್ತಿದೆ; | ಖಾದಿ ಸಂಘ ಸಂಸ್ಥೆಗಳಿಗೆ ವಾರ್ಷಿಕವಾಗಿ ಅಂದಾಜು ರೂ.3000.00 ಲಕ್ಷಗಳ ಅನುದಾನ ಬಿಡುಗಡೆಗೊಳಿಸಲಾಗುತ್ತಿದೆ. |
| ಇ) | 2018-19 ಹಾಗೂ 2019-20ನೇ ಸಾಲಿನಲ್ಲಿ ರಾಜ್ಯದಲ್ಲಿರುವ ಖಾದಿ ಸಂಘ ಸಂಸ್ಥೆಗಳಿಗೆ ವಾರ್ಷಿಕವಾಗಿ ಎಷ್ಟು ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ. | ರಾಜ್ಯದಲ್ಲಿರುವ ಖಾದಿ ಸಂಘ-ಸಂಸ್ಥೆಗಳಿಗೆ ವಾರ್ಷಿಕವಾಗಿ ಕೆಳಕಂಡಂತೆ ಅನುದಾನ ಬಿಡುಗಡೆಗೊಳಿಸಲಾಗಿದೆ.<br>ವರ್ಷ ಅನುದಾನ (ರೂ ಲಕ್ಷಗಳಲ್ಲಿ)<br>2018-19 ರೂ.3400.00 ಲಕ್ಷಗಳು<br>2019-20 ರೂ.2850.00 ಲಕ್ಷಗಳು |
| ಈ) | ಅನುದಾನ ಬಿಡುಗಡೆಗೊಳಿಸಿದ್ದಲ್ಲಿ, ವಿಳಂಬಕ್ಕೆ ಕಾರಣಗಳೇನು; | ಆಯವ್ಯಯದಲ್ಲಿ ಹಂಚಿಕೆಯಾಗಿರುವ ಅನುದಾನವನ್ನು ಆಯಾ ವರ್ಷದಲ್ಲೇ ಬಿಡುಗಡೆಗೊಳಿಸಲಾಗಿದ್ದು, ಯಾವುದೇ ವಿಳಂಬವಾಗಿರುವುದಿಲ್ಲ. |
| ಉ) | ಬಾಕಿ ಅನುದಾನವನ್ನು ಬಿಡುಗಡೆಗೊಳಿಸುವುದು ಯಾವಾಗ ? | 2018-19 ಮತ್ತು 2019-20ನೇ ಸಾಲಿನ ಆಯವ್ಯಯದಲ್ಲಿ ಹಂಚಿಕೆಯಾಗಿರುವ ಪೂರ್ಣ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ. 2020-21ನೇ ಸಾಲಿನಲ್ಲಿ ರೂ.3000.00 ಲಕ್ಷಗಳನ್ನು ಹಂಚಿಕೆ ಮಾಡಿದ್ದು, ಇದುವರೆಗೆ ರೂ.1440.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿದೆ. ಬಾಕಿ ರೂ.1560.00 ಲಕ್ಷಗಳನ್ನು ದಿ:31.03.2021 ರೊಳಗೆ ಬಿಡುಗಡೆ ಮಾಡಲಾಗುವುದು. |

**ಸಿಐ 148 ಸಿಎಸ್‌ಸಿ 2020**

*(ಬಿ.ಎಸ್.ಯಡಿಯೂರಪ್ಪ)*
ಮುಖ್ಯಮಂತ್ರಿ